ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಟ್ರೀ ಪಾರ್ಕ್ ನಿರ್ಮಾಣ ಕುರಿತು

ಶ್ರೀ ರಘುನಾಥ್‌ರಾವ್‌ಮಲ್ಕಾಪೂರೆ(ವಿಧಾನಸಭೆಯಿಂದಚುನಾಯಿತರಾದವರು):-

988 (1033) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ತಾಲ್ಲೂಕುವಾರು, ಮತ ಕ್ಷೇತ್ರವಾರು ಅರಣ್ಯ ಇಲಾಖೆಯಿಂದ ಟ್ರೀ ಪಾರ್ಕ್ ನಿರ್ಮಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಪ್ರತಿ ಟ್ರೀ ಪಾರ್ಕ್ ನಿರ್ಮಾಣಕ್ಕಾಗಿ ಸರ್ಕಾರ ನೀಡುತ್ತಿರುವ ಅನುದಾನವೆಷ್ಟು ;

(ಇ) 2018-19, 2019-2020ನೇ ಸಾಲಿನಲ್ಲಿ ಒಟ್ಟು ಎಷ್ಟು ಟ್ರೀ ಪಾರ್ಕ್‌ಗಳನ್ನು ನಿರ್ಮಾಣ ಮಾಡಲು ಅನುದಾನ ಬಿಡುಗಡೆ ಮಾಡಲಾಗಿದೆ; ಮಾಡಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು;

(ಈ) ಬೀದರ್ ಜಿಲ್ಲೆಯ ಎಲ್ಲಾ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಟ್ರೀ ಪಾರ್ಕ್ ನಿರ್ಮಾಣವನ್ನು ಯಾವಾಗ ಮಾಡಲಾಗುವುದು;

(ಉ) ಟ್ರೀ ಪಾರ್ಕ್ ನಿರ್ಮಾಣ ಮಾಡಲು ಇಲಾಖೆಯಿಂದ ಪ್ರಸ್ತಾವನೆ ಬಂದಿದೆಯೇ; ಬಂದಿದ್ದಲ್ಲಿ, ಮಂಜೂರಾತಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು ?